# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 161 (1139)
ಸದಸ್ಯರ ಹೆಸರು: : ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ: : 17.03.2020
ಉತ್ತರಿಸುವವರು: : ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿನ ಪುರಸಭೆ, ನಗರಸಭೆ, ಪಟ್ಟಣ ಪಂಚಾಯಿತಿಗಳಲ್ಲಿನ ಸ್ವತ್ತುಗಳ ಇ-ಖಾತೆ ಬಗ್ಗೆ ಇರುವ ಮಾನದಂಡವೇನು; | ಪೌರಾಡಳಿತ ನಿರ್ದೇಶನಾಲಯವು ಸುತ್ತೋಲೆ ಸಂಖ್ಯೆ: DMA 29 PTIS 2015-16, ದಿನಾಂಕ: 20-04-2016ರಲ್ಲಿ ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಆಸ್ತಿಗಳ ನಿರ್ವಹಣೆಗೆ ಇ-ಆಸ್ತಿ ತಂತ್ರಾಂಶದ ಬಳಕೆಯನ್ನು ಕಡ್ಡಾಯಗೊಳಿಸಿ ಡಿಜಿಟಲ್ ಸಹಿಯುಳ್ಳ ನಮೂನೆ-3 (ಇ-ಖಾತಾ) ಸೃಜಿಸಬೇಕಿರುತ್ತದೆ. ತಂತ್ರಾಂಶದಲ್ಲಿ ಆಸ್ತಿಯ ಮಾಹಿತಿಯನ್ನು ದಾಖಲಿಸುವ ಸಮಯದಲ್ಲಿ ಈ ಕೆಳಗೆ ಕಾಣಿಸಿದ ದಾಖಲೆಗಳನ್ನು ಅಪ್‌ಲೋಡ್ ಮಾಡಿದಲ್ಲಿ ಸದರಿ ಆಸ್ತಿಗಳು ಅಧಿಕೃತ ಆಸ್ತಿಗಳಿಗೆ ಅರ್ಹವಿರುತ್ತವೆ.<br><br>1) ಅನುಮೋದನೆಗೊಂಡ ಲೇಔಟ್‌ಗಳಿಗೆ ಮತ್ತು ಕೈಗಾರಿಕಾ ಉದ್ದೇಶಕ್ಕೆ ಪರಿವರ್ತಿಸಿದ ಜಮೀನು ಆಸ್ತಿಗಳಿಗೆ ಕೃಷಿಯೇತರ ಭೂಮಿಯಾಗಿ ಪರಿವರ್ತನೆಯಾದ ಆದೇಶದ ಪ್ರತಿ, ಲೇಔಟ್ ಅನುಮೋದನೆಗೊಂಡ ಆದೇಶದ ಪ್ರತಿ, ಲೇಔಟ್ ನಕ್ಷೆ ಮತ್ತು ನಿವೇಶನಗಳನ್ನು ಬಿಡುಗಡೆ ಮಾಡಿದ ಆದೇಶದ ಪ್ರತಿ.<br>2) ಸರ್ಕಾರದ/ಸ್ಥಳೀಯ ಸಂಸ್ಥೆಗಳಿಂದ ಅನುಮೋದನೆಯಾದ ಆಸ್ತಿಗಳಿಗೆ ಹಕ್ಕು ಪತ್ರ.<br>3) ಗ್ರಾಮಠಾಣ ಆಸ್ತಿಗಳಿಗೆ ತಹಶೀಲ್ದಾರರು / ಸರ್ವೇಯರ್ ನೀಡಿರುವ ಆದೇಶದ ಪ್ರತಿ ಮತ್ತು ಗಣಕೀಕೃತ ಡಿಜಿಟಲ್ ಸಹಿಯುಳ್ಳ ನಮೂನೆ-9ರ ಪ್ರತಿ.<br>4) ಕಟ್ಟಡ ಪರವಾನಿಗೆ ಹೊಂದಿರುವ ಆಸ್ತಿಗಳಿಗೆ ಕಟ್ಟಡ ಪರವಾನಿಗೆ.<br>5) ಯೋಜನಾ ಪ್ರಾಧಿಕಾರಗಳ ವ್ಯಾಪ್ತಿಯಲ್ಲಿ ಬರದೇ ಇರುವ ನಗರ ಸ್ಥಳೀಯ ಸಂಸ್ಥೆಗಳು ಪೌರಸಭೆಗಳ ಅಧಿನಿಯಮ, 1964ರ ಪ್ರಕರಣ 387ರ ಪ್ರಕಾರ ದಿನಾಂಕ 08-12-1976 ರಿಂದ ಕಡ್ಡಾಯವಾಗಿ ಹತ್ತಿರದ ಯೋಜನಾ ಪ್ರಾಧಿಕಾರಗಳಿಂದ / ನಗರಾಭಿವೃದ್ಧಿ ಪ್ರಾಧಿಕಾರಗಳಿಂದ ವಿನ್ಯಾಸ ಅನುಮೋದನೆ ಪಡೆಯಬೇಕಿರುತ್ತದೆ. ನಗರಾಭಿವೃದ್ಧಿ ಇಲಾಖೆಯ ಸುತ್ತೋಲೆ ಸಂಖ್ಯೆ: ನಅಇ 07 ಟಿಟಿಪಿ 2017, ದಿನಾಂಕ: 22-03-2017ರಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಸಕ್ಷಮ ಪ್ರಾಧಿಕಾರಗಳಿಂದ ವಿನ್ಯಾಸ ಅನುಮೋದನೆಯಾದ ನಿವೇಶನಗಳಿಗೆ ಮಾತ್ರ ಖಾತೆಯನ್ನು ನೀಡಲು ಕಟ್ಟುನಿಟ್ಟಿನ ಸೂಚನೆ ನೀಡಲಾಗಿರುತ್ತದೆ.<br><br>ಸರ್ಕಾರಿ ಭೂಮಿ / ನಿವೇಶನವನ್ನು ಹೊರತುಪಡಿಸಿ, ಮೇಲಿನ ಯಾವುದೇ ದಾಖಲೆ ಇಲ್ಲದಿರುವ ನಿವೇಶನಗಳನ್ನು ಅಧಿಕೃತವಲ್ಲದ ಆಸ್ತಿಯೆಂದು ದಾಖಲಿಸಲಾಗುವುದು.<br><br>ಸರ್ಕಾರದ ಸುತ್ತೋಲೆಗಳ ಸಂಖ್ಯೆ: ನಅಇ 02 ಎಂಎನ್‌ಇ 2019, ದಿನಾಂಕ: 17-06-2019 ಮತ್ತು 08-08-2019 ರಲ್ಲಿ ತಿಳಿಸಿರುವಂತೆ ಇ-ಆಸ್ತಿ ತಂತ್ರಾಂಶವನ್ನು ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕಡ್ಡಾಯಗೊಳಿಸಲಾಗಿರುತ್ತದೆ. |
| ಆ | ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ | ರಾಮನಗರ ಜಿಲ್ಲೆಯ ಗ್ರಾಮ ಪಂಚಾಯಿತಿಗಳಿಗೆ ಸಂಬಂಧಿಸಿದಂತೆ;<br>1. ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-9, 11ಎ ಮತ್ತು 11ಬಿ ವಿತರಿಸಲು ತೆರಿಗೆ ನಿರ್ಧರಣೆ ಪಟ್ಟಿಗಾಗಿ ಬಂದಿರುವ ಅರ್ಜಿಗಳ ಸಂಖ್ಯೆ – 2,20,617. |

| | | |
|---|---|---|
| | ಜಿಲ್ಲೆ ವ್ಯಾಪ್ತಿಯಲ್ಲಿನ ಇ-ಸ್ವತ್ತುಗಳ ಖಾತೆಗಳಿಗೆ ಸಲ್ಲಿಕೆಯಾದ ಅರ್ಜಿಗಳು ಎಷ್ಟು; ವಿಲೇವಾರಿಯಾದ ಅರ್ಜಿಗಳು, ತಿರಸ್ಕೃತ ಅರ್ಜಿಗಳು ಹಾಗೂ ಬಾಕಿ ಉಳಿದಿರುವ ಅರ್ಜಿಗಳು ಎಷ್ಟು; ಅರ್ಜಿಗಳನ್ನು ತಿರಸ್ಕರಿಸಲು ಕಾರಣವೇನು; | 2. ವಿಲೇವಾರಿಯಾದ ಅರ್ಜಿಗಳ ಸಂಖ್ಯೆ – 2,20,617<br>3. ತಿರಸ್ಕೃತವಾದ ಅರ್ಜಿಗಳ ಸಂಖ್ಯೆ – ಯಾವುದು ಇರುವುದಿಲ್ಲ.<br><br>ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮ ಪಂಚಾಯಿತಿಗಳಿಗೆ ಸಂಬಂಧಿಸಿದಂತೆ;<br>1. ಇ-ಸ್ವತ್ತು ಖಾತೆಗಳಿಗೆ ಬಂದಿರುವ ಅರ್ಜಿಗಳ ಸಂಖ್ಯೆ – 1,01,480.<br>2. ವಿಲೇವಾರಿಯಾದ ಅರ್ಜಿಗಳ ಸಂಖ್ಯೆ – 95,887.<br>3. ತಿರಸ್ಕೃತವಾದ ಅರ್ಜಿಗಳ ಸಂಖ್ಯೆ – 2,092.<br>4. ಬಾಕಿ ಉಳಿದಿರುವ ಅರ್ಜಿಗಳ ಸಂಖ್ಯೆ 3,501.<br><br>ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿನ ಆಸ್ತಿಗಳ ಮಾಲೀಕರು ನಮೂನೆ-9, 11ಎ ಮತ್ತು 11ಬಿ ಯನ್ನು ಗ್ರಾಮ ಪಂಚಾಯತಿಗಳು ವಿತರಿಸಲು ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಅನುಸಾರ ಸಂಬಂಧಿಸಿದ ದಾಖಲೆಗಳನ್ನು ನೀಡದಿರುವುದರಿಂದ ಅರ್ಜಿಗಳು ತಿರಸ್ಕೃತವಾಗಲು ಕಾರಣವಾಗುತ್ತದೆ.<br><br>ದಿನಾಂಕ: 20-04-2016ರಲ್ಲಿ ಇ-ಆಸ್ತಿ ತಂತ್ರಾಂಶವನ್ನು ಅನುಷ್ಠಾನಗೊಳಿಸಿದ ನಂತರ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿನ ಯಾವ ಗ್ರಾಮ ಪಂಚಾಯಿತಿಗಳೂ ನಗರ ಸ್ಥಳೀಯ ಸಂಸ್ಥೆಗಳಾಗಿ ಮೇಲ್ದರ್ಜೆಗೇರಿಸಲ್ಪಟ್ಟಿರುವುದಿಲ್ಲ.<br><br>ರಾಮನಗರ ಜಿಲ್ಲೆಯಲ್ಲಿ ಬಿಡದಿ ಪುರಸಭೆಯು ಹೊಸದಾಗಿ ಗ್ರಾಮ ಪಂಚಾಯಿತಿಯಿಂದ ಮೇಲ್ದರ್ಜೆಗೇರಿಸ್ಪಟ್ಟಿರುತ್ತದೆ. ಸದರಿ ನಗರ ಸ್ಥಳೀಯ ಸಂಸ್ಥೆಯು ಗ್ರಾಮ ಪಂಚಾಯಿತಿಯಾಗಿದ್ದಾಗ ಇ-ಸ್ವತ್ತು ತಂತ್ರಾಂಶವನ್ನು ಬಳಕೆ ಮಾಡಲಾಗುತ್ತಿತ್ತು. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪತ್ರ ಸಂಖ್ಯೆ: ಗ್ರಾಅಪ 379 ಗ್ರಾಪಂಅ 2019, ದಿನಾಂಕ: 30-05-2019ರಲ್ಲಿ ಇ-ಸ್ವತ್ತು ಮಾಹಿತಿಯನ್ನು ಇ-ಆಸ್ತಿ ತಂತ್ರಾಂಶಕ್ಕೆ ವರ್ಗಾಯಿಸಲು ಎನ್.ಐ.ಸಿ. ಸಂಸ್ಥೆಗೆ ಸೂಚಿಸಿರುತ್ತದೆ. ಸದರಿ ಕಾರ್ಯವು ಪ್ರಗತಿಯಲ್ಲಿದ್ದು, ವರ್ಗಾವಣೆ ಪ್ರಕ್ರಿಯೆ ಪೂರ್ಣಗೊಂಡ ನಂತರ ಇ-ಆಸ್ತಿ ತಂತ್ರಾಂಶವನ್ನು ಬಿಡದಿ ಪುರಸಭೆಗೆ ಅನುಷ್ಠಾನಗೊಳಿಸಲಾಗುವುದು. ಪ್ರಸ್ತುತ ಬಿಡದಿ ಪುರಸಭೆಯು ಕೈಬರಹದ ನಮೂನೆ-3/ಖಾತಾ ನಕಲನ್ನು ಆಸ್ತಿ ತೆರಿಗೆದಾರರಿಗೆ ನೀಡುತ್ತಿದೆ. |
| ಇ | Town & Country Act ನಡಿಯಲ್ಲಿ ರೂಪಿಸಿರುವ ನಿಯಮಗಳೇನು? (ಇದರ ಸ್ವರೂಪ ಮತ್ತು ರೂಪುರೇಷೆಗಳನ್ನು ತಿಳಿಸುವುದು) | ಇ-ಖಾತೆ ವಿಷಯವು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ವ್ಯಾಪ್ತಿಯಡಿ ಬರುವುದಿಲ್ಲವಾದ್ದರಿಂದ ಇ-ಸ್ವತ್ತಿನ ಕುರಿತಾಗಿ ಯಾವುದೇ ನಿಯಮಾವಳಿಗಳನ್ನು ರೂಪಿಸಿರುವುದಿಲ್ಲ. |

**ಸಂಖ್ಯೆ: ನಅಇ 46 ಜಿಇಎಲ್ 2020**

(ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು